# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 61 |
| ಮಾನ್ಯ ಸದಸ್ಯರ ಹೆಸರು | ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 15.07.2019 |
| ಉತ್ತರಿಸುವ ಸಚಿವರ | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ವತಿಯಿಂದ ನಡೆಯುತ್ತಿರುವ ವಸತಿ ನಿಲಯಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ವಿವರ ನೀಡುವುದು) | ಬೀದರ್ ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ 45 ಮೆಟ್ರಿಕ್-ಪೂರ್ವ ಹಾಗೂ 32 ಮೆಟ್ರಿಕ್-ನಂತರದ ಹೀಗೆ ಒಟ್ಟು 77 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿವೆ.<br><br>ತಾಲ್ಲೂಕುವಾರು ವಿವರ ಅನುಬಂಧ-1ರಲ್ಲಿ ನೀಡಲಾಗಿದೆ. |
| ಆ | ವಸತಿ ನಿಲಯಗಳಲ್ಲಿ ಮೂಲಭೂತ ಸೌಲಭ್ಯಗಳಿಲ್ಲದೆ ವಿದ್ಯಾರ್ಥಿಗಳು ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ; | ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕೆಲವೊಂದು ವಿದ್ಯಾರ್ಥಿನಿಲಯಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಇರುತ್ತವೆ. ಪ್ರತಿ ವರ್ಷ ಆಯವ್ಯಯದಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆ ಹಾಗೂ ನಿವೇಶನದ ಲಭ್ಯತೆಗನುಗುಣವಾಗಿ ಹಂತ ಹಂತವಾಗಿ ಸ್ವಂತ ಕಟ್ಟಡಗಳನ್ನು ನಿರ್ಮಿಸಿ, ಅಗತ್ಯ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲಾಗುತ್ತಿದೆ.<br><br>ಮುಂದುವರೆದು, ಬೀದರ್ ಜಿಲ್ಲೆಯಲ್ಲಿನ ಇಲಾಖೆಯ ವಿದ್ಯಾರ್ಥಿನಿಲಯಗಳಿಗೆ ಒದಗಿಸಲಾಗಿರುವ ಮೂಲಭೂತ ಸೌಕರ್ಯಗಳ ವಿವರಗಳನ್ನು ಅನುಬಂಧ-2ರಲ್ಲಿ ನೀಡಲಾಗಿದೆ. |
| ಇ | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು; ಭರ್ತಿ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು? | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿಮಾಡಲು ಈ ಕೆಳಕಂಡಂತೆ ಕ್ರಮ ವಹಿಸಲಾಗಿದೆ.<br>***ಖಾಲಿ ಹುದ್ದೆಗಳ ಭರ್ತಿಗೆ ವಹಿಸಿರುವ ಕ್ರಮ:***<br>1. ಒಂದು ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಹುದ್ದೆಯ ಭರ್ತಿಗೆ ಕೆ ಪಿ ಎಸ್ ಸಿ ಯಿಂದ ದಿ: 1.3.2017 ರಲ್ಲಿ ಅಧಿಸೂಚನೆ ಹೊರಡಿಸಲಾಗಿದೆ.<br>2. 37 ಗ್ರೂಪ್ ಬಿ ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಹುದ್ದೆಗಳನ್ನು ತುಂಬಲು ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆ ಪ್ರಗತಿಯಲ್ಲಿದ್ದು, ಸದರಿ ನಿಯಮಗಳಿಗೆ ಅನುಮತಿ ದೊರಕಿದ ಕೂಡಲೇ ನಿಯಮಾನುಸಾರ ಹುದ್ದೆಗಳನ್ನು ತುಂಬಲಾಗುವುದು.<br>3. 2017ನೇ ಸಾಲಿನಲ್ಲಿ ಖಾಲಿ ಇರುವ 10 ಪ್ರಥಮ ದರ್ಜೆ ಸಹಾಯಕರು ಹಾಗೂ 19 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ಕೆ ಪಿ ಎಸ್ ಸಿ ಮೂಲಕ ಭರ್ತಿ ಮಾಡುವ ಕುರಿತು ಪ್ರಸ್ತಾವನೆ ಸಲ್ಲಿಸಿದ್ದು ಈಗಾಗಲೇ ಕೆ.ಪಿ.ಎಸ್.ಸಿ ಯು ದಿ: 01.09.2017ರಂದು ಅಧಿಸೂಚನೆ ಹೊರಡಿಸಲಾಗಿದೆ.<br>2017ನೇ ಸಾಲಿನಲ್ಲಿ 440 ನಿಲಯ ಮೇಲ್ವಿಚಾರಕರ ಹುದ್ದೆಗಳನ್ನು ತುಂಬಲು ಪುನಃ ಅನುಮತಿ ನೀಡಿದ್ದು, ಸದರಿ ಹುದ್ದೆಗಳ ಪೈಕಿ 167 ಹುದ್ದೆಗಳು ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದ್ದು, ಸದರಿ 440 ಹುದ್ದೆಗಳನ್ನು ತುಂಬುವ ಬಗ್ಗೆ ಕೆ.ಪಿ.ಎಸ್.ಸಿ ಗೆ ದಿ: 04.07.2017ರಂದು ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ದಿ: 25.11.2017 ರಲ್ಲಿ ಅಧಿಸೂಚನೆ ಹೊರಡಿಸಲಾಗಿದೆ. |

| | | |
|---|---|---|
| | | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಬೀದರ್ ಜಿಲ್ಲೆಯನ್ನೊಳಗೊಂಡಂತೆ ಹೈದರಾಬಾದ್ ಕರ್ನಾಟಕ ವ್ಯಾಪ್ತಿಯ ಪ್ರದೇಶದ 6 ಜಿಲ್ಲೆಗಳಲ್ಲಿ ಭರ್ತಿಮಾಡಿರುವ ಹಾಗೂ ಖಾಲಿ ಇರುವ ಹುದ್ದೆಗಳ ಭರ್ತಿಗೆ ಈ ಕೆಳಕಂಡಂತೆ ಕ್ರಮ ವಹಿಸಲಾಗಿದೆ.<br><br>***ಭರ್ತಿ ಮಾಡಿರುವ ವಿವರ:***<br>1. 2 ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಹುದ್ದೆಗಳನ್ನು ಕೆ ಪಿ ಎಸ್ ಸಿ ಯಿಂದ ಭರ್ತಿಮಾಡಲಾಗಿದ್ದು, ನೇಮಕಾತಿ ಆದೇಶ ಹೊರಡಿಸಲಾಗಿದೆ.<br>2. 06 ಗ್ರೂಪ್ ಬಿ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಗಳನ್ನು ಮುಂಬಡ್ತಿ ಮೂಲಕ ತುಂಬಲಾಗಿದೆ.<br>3. 14 ಪ್ರಥಮ ದರ್ಜೆ ಸಹಾಯಕರು ಹಾಗೂ 15 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ಕೆ. ಪಿ ಎಸ್ ಸಿ ಮೂಲಕ ಭರ್ತಿ ಮಾಡಲಾಗಿದೆ.<br>4. 96 ನಿಲಯ ಮೇಲ್ವಿಚಾರಕರ ಹುದ್ದೆಗಳನ್ನು ಕೆ.ಪಿ.ಎಸ್.ಸಿ ಮೂಲಕ 2016ನೇ ಸಾಲಿನಲ್ಲಿ ತುಂಬಲಾಗಿರುತ್ತದೆ.<br>5. 796 ಗ್ರೂಪ್ ಡಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲಾಗಿದೆ. |

ಸಂಖ್ಯೆ:ಹಿಂವಕ 116 ಬಿಎಂಎಸ್ 2019

(ಸಿ.ಪುಟ್ಟರಂಗಶೆಟ್ಟಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 61ರ (ಅ)ಕ್ಕೆ ಅನುಬಂಧ-1

ಬೀದರ್ ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳ ತಾಲ್ಲೂಕುವಾರು ವಿವರ

| ಕ್ರ ಸಂ | ತಾಲೂಕಿನ ಹೆಸರು | ಮೆಟ್ರಿಕ ಪೂರ್ವ | | ಮೆಟ್ರಿಕ ನಂತರ | | ಒಟ್ಟು | |
|---|---|---|---|---|---|---|---|
| | | ನಿಲಯಗಳ ಸಂಖ್ಯೆ | ವಿದ್ಯಾರ್ಥಿಗಳ ಮ. ಸಂಖ್ಯೆ | ನಿಲಯಗಳ ಸಂಖ್ಯೆ | ವಿದ್ಯಾರ್ಥಿಗಳ ಮ. ಸಂಖ್ಯೆ | ವಸತಿ ನಿಲಯಗಳ ಸಂಖ್ಯೆ | ಮಂಜೂರಾತಿ ಸಂಖ್ಯೆ |
| 1 | ಔರಾದ | 8 | 455 | 5 | 525 | 13 | 980 |
| 2 | ಬಸವಕಲ್ಯಾಣ | 13 | 807 | 4 | 450 | 17 | 1257 |
| 3 | ಭಾಲ್ಕಿ | 7 | 330 | 5 | 525 | 12 | 855 |
| 4 | ಬೀದರ್ | 7 | 335 | 14 | 1425 | 21 | 1760 |
| 5 | ಹುಮನಾಬಾದ್ | 10 | 540 | 4 | 450 | 14 | 990 |
| | ಒಟ್ಟು:- | **45** | **2467** | **32** | **3375** | **77** | **5842** |

ಪ್ರತಿ. ಶ್ರೀ

ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 61ರ (ಅ)ಕ್ಕೆ ಅನುಬಂಧ-2

ಬೀದರ್ ಜಿಲ್ಲೆಯಲ್ಲಿನ ವಿದ್ಯಾರ್ಥಿನಿಲಯಗಳಿಗೆ ಒದಗಿಸಲಾಗಿರುವ ಮೂಲಭೂತ ಸೌಕರ್ಯಗಳ ವಿವರ

| ಒಟ್ಟು ವಿದ್ಯಾರ್ಥಿ ನಿಲಯಗಳ ಸಂಖ್ಯೆ | ಸೋಲಾರ್ ವಾಟರ್ ಹೀಟರ್ ಕಲ್ಪಿಸಿರುವ ವಿ.ನಿ ಗಳ ಸಂಖ್ಯೆ | ವಾಟರ್ ಪ್ಯೂರಿ ಫೈಯರ್ ಕಲ್ಪಿಸಿರುವ ವಿ.ನಿ ಗಳ ಸಂಖ್ಯೆ | ಸೋಲಾರ್ ಲೈಟ್ ಇರುವ ವಿ.ನಿ ಗಳ ಸಂಖ್ಯೆ | ಟ್ರ್ಯೂಟೈಂ ಕಾಟ್ಸ್ / ಬೆಡ್ಸ್ | ಚಪ್ಪಲ್ ಸ್ಟ್ಯಾಂಟ್ / ತಟ್ಟೆ ಸ್ಟ್ಯಾಂಡ್ | ಡೈನಿಂಗ್ ಟೇಬಲ್ | ಕಂಪ್ಯೂಟರ್ ಜೊತೆ ಇಂಟರ್‌ನೆಟ್ ಸೌಲಭ್ಯ ಇರುವ ವಿ.ನಿ. ಗಳ ಸಂಖ್ಯೆ | ಯು.ಪಿ. ಎಸ್. ಅಳವಡಿಸಿರುವ ವಿ.ನಿ. ಗಳ ಸಂಖ್ಯೆ | ಗ್ರಂಥಾಲಯ ವ್ಯವಸ್ಥೆ ಇರುವ ವಿ.ನಿ ಗಳ ಸಂಖ್ಯೆ | ಸಿ.ಸಿ. ಕ್ಯಾಮರಾ ಅಳವಡಿಸಿರುವ ವಿ.ನಿ ಗಳ ಸಂಖ್ಯೆ | ಕ್ರೀಡಾ ಸಾಮಗ್ರಿಗಳನ್ನು ಒದಗಿಸಿರುವ ವಿ.ನಿ. ಗಳ ಸಂಖ್ಯೆ |
|---|---|---|---|---|---|---|---|---|---|---|---|
| 77 | 66 | 75 | 76 | 68 ನಿಲಯಗಳಿಗೆ | 77 | 77 | 76 | 76 | 76 | 14 | 76 |

1) ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ಪಡೆದ ಎಲ್ಲಾ ವಿದ್ಯಾರ್ಥಿಗಳಿಗೆ ಶುಚಿ-ಸಂಭ್ರಮ ಕಿಟ್ ಒದಗಿಸಲಾಗಿರುತ್ತದೆ.
2) ಮೆಟ್ರಿಕ ಪೂರ್ವ ವಿದ್ಯಾರ್ಥಿಗಳಿಗೆ ಲೇಖನ ಸಾಮಗ್ರಿ ಒದಗಿಸಲಾಗಿರುತ್ತದೆ.
3) ವಿದ್ಯಾರ್ಥಿ ನಿಲಯಗಳಲ್ಲಿ ಪ್ರವೇಶ ಪಡೆದ ಎಲ್ಲಾ ವಿದ್ಯಾರ್ಥಿಗಳಿಗೆ ಜಮಖಾನ / ಹೊದಿಕೆ ಪೂರೈಸಲಾಗಿರುತ್ತದೆ.
4) ಮೆಟ್ರಿಕ ನಂತರದ ಬಾಲಕಿಯರ ವಸತಿನಿಲಯಗಳಿಗೆ ಸಿ.ಸಿ.ಕ್ಯಾಮರಾ ಅಳವಡಿಸಲಾಗಿರುತ್ತದೆ.
5) 14 ವಸತಿ ನಿಲಯಗಳ ಕಟ್ಟಡಗಳು ನಿರ್ಮಾಣ ಹಂತದಲ್ಲಿರುತ್ತದೆ.